

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಸಂಖ್ಯೆ : 1250
ಸದಸ್ಯರ ಹೆಸರು : ಶ್ರೀ ಪುಟ್ಟಣ್ಣ (ಶಿಕ್ಷಕರ ಕ್ಷೇತ್ರ).
ಉತ್ತರಿಸಬೇಕಾದ ದಿನಾಂಕ : 23-12-2021.
ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿ.

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ. | ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಲ್ಲಿ ಯಾವ ಯಾವ ವಿಧದ ಎಷ್ಟು ಶಾಲಾ ಕಾಲೇಜುಗಳು ಕಾರ್ಯನಿರ್ವಹಿಸುತ್ತಿವೆ; (ಸಂಪೂರ್ಣ ವಿವರ ನೀಡುವುದು) | ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಡಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ವಿಧದ ಶಾಲಾ-ಕಾಲೇಜುಗಳ ವಿವರಗಳನ್ನು **ಅನುಬಂಧ-01** ರಲ್ಲಿ ನೀಡಲಾಗಿದೆ. |
| ಆ. | ಹಾಲಿ ನಡೆಯುತ್ತಿರುವ ಶಾಲಾ-ಕಾಲೇಜುಗಳನ್ನು ಹೊರತುಪಡಿಸಿ ಎಷ್ಟು ಹೊಸ ಶಾಲಾ ಕಾಲೇಜುಗಳನ್ನು ಪ್ರಾರಂಭಿಸಲು ಪ್ರಸ್ತಾವನೆ ಸಲ್ಲಿಸಲಾಗಿದೆ; (ವಿವರ ನೀಡುವುದು) | ಹಾಲಿ ನಡೆಯುತ್ತಿರುವ ಶಾಲಾ-ಕಾಲೇಜುಗಳನ್ನು ಹೊರತುಪಡಿಸಿ 05 ಅಲ್ಪಸಂಖ್ಯಾತರ ಮೊರಾರ್ಜಿದೇಸಾಯಿ ವಸತಿ ಶಾಲೆಗಳು, 03 ಅಲ್ಪಸಂಖ್ಯಾತರ ಮೊರಾರ್ಜಿದೇಸಾಯಿ ಪದವಿ ಪೂರ್ವ ವಸತಿ ಕಾಲೇಜುಗಳು ಹಾಗೂ 02 ಅಲ್ಪಸಂಖ್ಯಾತರ ಮಾದರಿ ವಸತಿ ಶಾಲೆ (ನವೋದಯ)ಗಳನ್ನು ಪ್ರಾರಂಭಿಸಲು ಪ್ರಸ್ತಾವನೆ ಸ್ವೀಕರಿಸಲಾಗಿದ್ದು, ಆರ್ಥಿಕ ಇಲಾಖೆಯ ಪರಿಶೀಲನೆಯಲ್ಲಿದೆ. |
| ಇ. | ಹಾಲಿ ನಡೆಯುತ್ತಿರುವ ಶಾಲಾ ಕಾಲೇಜುಗಳನ್ನು ಹೊರತುಪಡಿಸಿ ಎಷ್ಟು ಹೊಸ ಶಾಲಾ ಕಾಲೇಜುಗಳ ಪ್ರಾರಂಭಕ್ಕೆ ಅನುಮತಿ ನೀಡಲಾಗಿದೆ; (ವಿವರ ನೀಡುವುದು) | ಪ್ರಸ್ತುತ ಹೊಸ ಶಾಲಾ ಕಾಲೇಜುಗಳ ಪ್ರಾರಂಭಿಸಲು ಅನುಮತಿ ನೀಡಿರುವುದಿಲ್ಲ. |
| ಈ. | ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳಿಗೆ ಬಡ್ತಿ ನೀಡಲು ಅನುಕೂಲವಾಗುವ ಹೊಸ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರಚಿಸಲಾಗಿದೆಯೇ; ರಚಿಸದಿದ್ದಲ್ಲಿ, ಯಾವ ಕಾಲಮಿತಿಯಲ್ಲಿ ರಚಿಸಲಾಗುವುದು; (ವಿವರ ನೀಡುವುದು) | ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಎಂಡಬ್ಲ್ಯೂಡಿ 154 ಎಂಡಿಎಸ್ 2010, ದಿನಾಂಕ:15.03.2011ರಲ್ಲಿ ರಚಿಸಲಾಗಿರುತ್ತದೆ.<br><br>2011ರ ನಂತರ ಹೊಸದಾಗಿ ಸೃಜಿಸಿ ಮಂಜೂರಾಗಿರುವ ಸುಮಾರು 50 ವಿವಿಧ ವೃಂದಗಳ ಹುದ್ದೆಗಳನ್ನು ಸೇರಿಸಿ ವೃಂದ ಮತ್ತು ನೇಮಕಾತಿ ನಿಯಮಗಳ ಪರಿಷ್ಕರಣೆಗಾಗಿ ಪ್ರಸ್ತಾವನೆಯನ್ನು ದಿನಾಂಕ:10.07.2018 ರಂದು ಸರ್ಕಾರಕ್ಕೆ ಸಲ್ಲಿಸಲಾಯಿತು. ತದನಂತರ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ಸಂಸದೀಯ ವ್ಯವಹಾರಗಳ ಇಲಾಖೆ ಮತ್ತು ಆರ್ಥಿಕ ಇಲಾಖೆಯಿಂದ ಕೋರಲಾದ ಸ್ಪಷ್ಟೀಕರಣದೊಂದಿಗೆ ವೃಂದ ಮತ್ತು ನೇಮಕಾತಿ ನಿಯಮಗಳ ಪರಿಷ್ಕರಣೆ ಪ್ರಸ್ತಾವನೆಯು ಆರ್ಥಿಕ ಇಲಾಖೆಯ ಪರಿಶೀಲನೆಯಲ್ಲಿದೆ. |

| | | |
|---|---|---|
| ಉ. | ಈ ಶಾಲಾ ಕಾಲೇಜುಗಳ ಬಡ್ತಿಗಾಗಿ ಯಾವ-ಯಾವ ವೃಂದಕ್ಕೆ ಎಷ್ಟು ಹುದ್ದೆಗಳನ್ನು ಮೀಸಲಿಡಲಾಗಿದೆ? (ವಿವರ ನೀಡುವುದು) | ಪ್ರಸ್ತುತ 2011ರ ವೃಂದ ಮತ್ತು ನೇಮಕಾತಿ ನಿಯಮಗಳು ಚಾಲ್ತಿಯಲ್ಲಿರುವುದರಿಂದ ಇದರಲ್ಲಿ 2011ರ ನಂತರ ಹೊಸದಾಗಿ ಸೃಜಿಸಿ ಮಂಜೂರಾಗಿರುವ ಸುಮಾರು 50 ವಿವಿಧ ವೃಂದಗಳ ಹುದ್ದೆಗಳು ಸೇರ್ಪಡೆಯಾಗಿರುವುದಿಲ್ಲ ಹಾಗೂ ಪರಿಷ್ಕೃತ ವೃಂದ ಮತ್ತು ನೇಮಕಾತಿ ನಿಯಮಗಳು ರಚನೆಯಾಗಿಲ್ಲದ ಕಾರಣ ನೇರ ನೇಮಕಾತಿ ಮತ್ತು ಮುಂಬಡ್ತಿಗಾಗಿ ಕಾಯ್ದಿರಿಸಲಾದ ಹುದ್ದೆಗಳ ಅನುಪಾತ ಮತ್ತು ಹುದ್ದೆಗಳ ಸಂಖ್ಯೆಗಳ ವಿವರಗಳು ಅಂತಿಮಗೊಂಡಿರುವುದಿಲ್ಲ. ಆದ್ದರಿಂದ ಮುಂಬಡ್ತಿಗಾಗಿ ಹುದ್ದೆಗಳನ್ನು ಕಾಯ್ದಿರಿಸಿರುವುದಿಲ್ಲ. |

ಸಂಖ್ಯೆ: **MWD 319 LMQ 2021**

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ

LCQ No: 1250

| ಅನುಬಂಧ-01 | | | | | | |
|---|---|---|---|---|---|---|
| **ಪ್ರಸ್ತುತ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಡಿಯಲ್ಲಿ ಈ ಕೆಳಗಿನ ವಿಧದ ಶಾಲಾ-ಕಾಲೇಜುಗಳು ಕಾರ್ಯ ನಿರ್ವಹಿಸುತ್ತಿವೆ.** | | | | | | |
| **ಕ್ರ.ಸಂ** | **ಶಾಲೆ/ವಿದ್ಯಾರ್ಥಿನಿಲಯ** | **ಕಾರ್ಯ ನಿರ್ವಹಿಸುತ್ತಿರುವ ಒಟ್ಟು ಶಾಲೆ/ಕಾಲೇಜುಗಳು** | **ಒಟ್ಟು ಮಂಜೂರಾತಿ** | **ನಡೆಸುತ್ತಿರುವ ತರಗತಿಗಳು** | **ಲಿಂಗವಾರು ವಿವರ** | **ಬೋಧಿಸುತ್ತಿರುವ ಮಾಧ್ಯಮ** |
| 1 | ಅಲ್ಪಸಂಖ್ಯಾತರ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳು | 100 | 27250 | 6ನೇ ತರಗತಿ ಯಿಂದ 10 ನೇ ತರಗತಿ | ಸಹಶಿಕ್ಷಣ/ ಬಾಲಕಿಯರು | ಆಂಗ್ಲ |
| 2 | ಅಲ್ಪಸಂಖ್ಯಾತರ ಮೊರಾರ್ಜಿ ದೇಸಾಯಿ ಪದವಿ ಪೂರ್ವ ವಸತಿ ಕಾಲೇಜುಗಳು | 21 | 5120 | ಪ್ರಥಮ & ದ್ವಿತೀಯ ಪಿಯುಸಿ | ಬಾಲಕಿಯರು | ಆಂಗ್ಲ |
| 3 | ಅಲ್ಪಸಂಖ್ಯಾತರ ಸರ್ಕಾರಿ ಮುಸ್ಲಿಂ ವಸತಿ ಶಾಲೆಗಳು | 5 | 1500 | 6ನೇ ತರಗತಿ ಯಿಂದ 10 ನೇ ತರಗತಿ | ಸಹಶಿಕ್ಷಣ/ ಬಾಲಕರು | ಉರ್ದು/ಆಂಗ್ಲ |
| 4 | ಅಲ್ಪಸಂಖ್ಯಾತರ ಮಾದರಿ ಶಾಲೆಗಳು (ನವೋದಯ) | 8 | 4480 | 6ನೇ ತರಗತಿ ಯಿಂದ 12 ನೇ ತರಗತಿ | ಸಹಶಿಕ್ಷಣ | ಆಂಗ್ಲ |
| 5 | ಮೌಲಾನ ಆಜಾದ್ ಮಾದರಿ ಶಾಲೆಗಳು | 200 | 60000 | 6ನೇ ತರಗತಿ ಯಿಂದ 10 ನೇ ತರಗತಿ | ಸಹಶಿಕ್ಷಣ | ಆಂಗ್ಲ |
| **ಒಟ್ಟು** | | **648** | **98350** | | | |